ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 640 |
| ಸದಸ್ಯರ ಹೆಸರು | : | ಶ್ರೀ ಐವನ್ ಡಿ'ಸೋಜಾ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸುವ ದಿನಾಂಕ | : | 11.03.2020. |
| ಉತ್ತರಿಸುವ ಸಚಿವರು | : | ಉಪಮುಖ್ಯಮಂತ್ರಿ<br>ಲೋಕೋಪಯೋಗಿ ಮತ್ತು<br>ಸಮಾಜ ಕಲ್ಯಾಣ ಇಲಾಖೆ |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಷ್ಟ್ರೀಯ ಹೆದ್ದಾರಿ 169 ರ ಮಂಗಳೂರಿನಿಂದ ಮೂಡಬಿದ್ರೆ ರಸ್ತೆಯಲ್ಲಿ ಪ್ರತಿ ನಿತ್ಯ ಅಪಘಾತಗಳು ಸಂಭವಿಸುತ್ತಿದ್ದು, 15 ವರ್ಷಗಳಿಂದ ರಸ್ತೆಯ ಕಾಮಗಾರಿ ನಡೆಯದೇ ಇರುವುದರಿಂದ ಜನ ಆಕ್ರೋಶಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಹೆದ್ದಾರಿ ಕಾಮಗಾರಿ ಪ್ರಾರಂಭಗೊಳ್ಳುವುದು ಯಾವಾಗ; ಪ್ರಸ್ತುತ ಯಾವ ಹಂತದಲ್ಲಿದೆ; | ರಾಷ್ಟ್ರೀಯ ಹೆದ್ದಾರಿ 169ರ ಮಂಗಳೂರು-ಮೂಡಬಿದ್ರೆ ರಸ್ತೆಯಲ್ಲಿ 2019-20ನೇ ಸಾಲಿನಲ್ಲಿ ಸೋಲಾಪುರ - ಮಂಗಳೂರು ಭಾಗದ ಕಿ.ಮೀ.706.00 ರಿಂದ 743.900 ರವರೆಗೆ ನಿಯತಕಾಲಿಕ ನವೀಕರಣ ಕಾಮಗಾರಿಯಲ್ಲಿ (ಜಾಬ್ ನಂ.ಎನ್‌ಹೆಚ್-169-ಕೆಎನ್‌ಟಿ-ಪಿಆರ್-2019-20-12) ಕಿ.ಮೀ.710.830 ರಿಂದ 718.400 ರವರೆಗೆ ಹಾಗೂ ಕಿ.ಮೀ.731.290 ರಿಂದ ಕಿ.ಮೀ. 736.630ರವರೆಗೆ ಹಾಗೂ 736.630 ರಿಂದ 736.690 ರವರೆಗೆ - ಒಟ್ಟು 12.91 ಕಿ.ಮೀ.) ಕಾಮಗಾರಿಯನ್ನು ರೂ.6.9209 ಕೋಟಿ ಮೊತ್ತದಲ್ಲಿ ಕೈಗೆತ್ತಿಕೊಳ್ಳಲಾಗಿದ್ದು ಪ್ರಸ್ತುತ ಕಾಮಗಾರಿಯು ಪ್ರಗತಿಯಲ್ಲಿದೆ.<br>ಅದಲ್ಲದೆ ರಾಷ್ಟ್ರೀಯ ಹೆದ್ದಾರಿ 169ರ ಕಿ.ಮೀ.706.00 ರಿಂದ 710.830, ಕಿ.ಮೀ.718.400 ರಿಂದ 731.290 ಹಾಗೂ ಕಿ.ಮೀ.736.630 ರಿಂದ 743.900 ರವರೆಗೆ ನಿಯತಕಾಲಿಕ ನವೀಕರಣದ ಕಾಮಗಾರಿಗೆ ರೂ.8.00 ಕೋಟಿಗಳ ಅಂದಾಜು ಪಟ್ಟಿಯನ್ನು ಕೇಂದ್ರ ಭೂಸಾರಿಗೆ ಮಂತ್ರಾಲಯಕ್ಕೆ ಮಂಜೂರಾತಿಗಾಗಿ ಸಲ್ಲಿಸಲಾಗಿದೆ. |
| ಆ) | ಹೆದ್ದಾರಿ ವಿಸ್ತರಣೆಗೆ ಭೂಮಿಯನ್ನು ಸ್ವಾಧೀನಪಡಿಸಿ ಕೊಳ್ಳಲಾಗಿದೆಯೇ; ರಸ್ತೆಗೆ ಹೋಗುವ ಭೂಮಿಯನ್ನು ಗುರುತಿಸಲಾಗಿದೆಯೇ; (ವಿವರ ನೀಡುವುದು) | ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದ ವತಿಯಿಂದ ರಾಷ್ಟ್ರೀಯ ಹೆದ್ದಾರಿ 169ರ ವಿಸ್ತರಣೆಗೆ ಭೂಸ್ವಾಧೀನಪಡಿಸಲು ಭೂಮಿಯನ್ನು ಗುರುತಿಸಲಾಗಿದೆ. ವಿವರಗಳು ಕೆಳಗಿನಂತಿವೆ :<br>1. 3D - 33.33 ಹೆಕ್ಟೇರ್ ನೋಟಿಫಿಕೇಷನ್ ಆಗಿದೆ.<br>2. ಹೆಚ್ಚುವರಿ 3A- 210.58 ಹೆಕ್ಟೇರ್ ನೋಟಿಫಿಕೇಷನ್ ಆಗಿದೆ. 3D ಪ್ರಗತಿಯಲ್ಲಿದೆ. |
| ಇ) | ಹೆದ್ದಾರಿ 169 ಪೂರ್ಣಗೊಂಡು ವಾಹನ ಸಂಚಾರಕ್ಕೆ ಬಿಡುಗಡೆ ಮಾಡುವುದು ಯಾವಾಗ; ಇದಕ್ಕೆ ತಗಲುವ ಸಮಯ ಎಷ್ಟು; (ವಿವರ ನೀಡುವುದು) | ರಾಷ್ಟ್ರೀಯ ಹೆದ್ದಾರಿ 169ರ ಮಂಗಳೂರು-ಕಾರ್ಕಳ ಭಾಗದ ಹೆದ್ದಾರಿಯನ್ನು ಚತುಷ್ಪಥ ರಸ್ತೆಯನ್ನಾಗಿ ಅಭಿವೃದ್ಧಿಪಡಿಸಲು ಡಿ.ಪಿ.ಆರ್. ತಯಾರಿಸಿ ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದ ಕೇಂದ್ರ ಕಚೇರಿಗೆ ಸಲ್ಲಿಸಲಾಗಿದೆ. ಪ್ರಸ್ತುತ ಈ ಹೆದ್ದಾರಿಯು ಮಧ್ಯಮ ಪಥವಿದ್ದು ವಾಹನಗಳು ಸಂಚರಿಸುತ್ತಿವೆ. |

| ಕ್ರ.ಸಂ. | ಪ್ರಶ್ನೆ | ಉತ್ತರ |
| --- | --- | --- |
| ಈ) | ಭೂ ಸ್ವಾಧೀನಗೊಳಿಸಲು ಸರ್ಕಾರಕ್ಕೆ ತಗಲುವ ಅಂದಾಜು ವೆಚ್ಚ ಎಷ್ಟು? (ಸಂಪೂರ್ಣ ವಿವರ ನೀಡುವುದು) | ಭೂಸ್ವಾಧೀನ ಪ್ರಕ್ರಿಯೆಯು ಪ್ರಾಥಮಿಕ ಹಂತಲ್ಲಿದ್ದು, ಪ್ರಕ್ರಿಯೆ ಪೂರ್ಣಗೊಂಡ ನಂತರ ಭೂಸ್ವಾಧೀನ ವೆಚ್ಚವು ತಿಳಿದುಬರಲಿದೆ. |

ಕಡತ ಸಂಖ್ಯೆ: ಲೋಇ 69 ಸಿಎನ್‌ಹೆಚ್ 2020 (ಇ)

(ಗೋವಿಂದ.ಎಂ.ಕಾರಜೋಳ)
ಉಪ ಮುಖ್ಯಮಂತ್ರಿ
ಲೋಕೋಪಯೋಗಿ ಮತ್ತು
ಸಮಾಜ ಕಲ್ಯಾಣ ಇಲಾಖೆ